WPP-47

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಏಪ್ರಿಲ್ ೧೯, ೨೦೧೨ (ಚೈತ್ರ ೩೦, ಶಕ ವರ್ಷ ೧೯೩೪) | ಸಂಚಿಕೆ ೧೬ |
|---|---|---|

## ಭಾಗ – ೨

## ನೇಮಕಗಳು, ಸ್ಥಳ ನೇಮಕಗಳು, ವರ್ಗಾವಣೆಗಳು, ರಜೆ ಮತ್ತು ಅಧಿಕಾರಿಗಳು, ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಸಿಆಸುಇ 43 ಆಸೇಇ 2010, ಬೆಂಗಳೂರು, ದಿನಾಂಕ : 29–03–2012.**

ಶ್ರೀ ಎನ್.ಎಂ. ಪನಾಲಿ, ಕೆ.ಎ.ಎಸ್. (ಸೂಪರ್ ಟೈ ಸ್ಕೇಲ್) ಅಧಿಕಾರಿ (ಪ್ರಸ್ತುತ ಐ.ಎ.ಎಸ್. ಅಧಿಕಾರಿ) ಮುಖ್ಯ ಆಡಳಿತಾಧಿಕಾರಿ, ಸಂಜಯಗಾಂಧಿ ಟ್ರಾಮ ಮತ್ತು ಆಸ್ಥಿ ಚಿಕಿತ್ಸಾ ಸಂಸ್ಥೆ, ಬೆಂಗಳೂರು ಇವರಿಗೆ ಅಧಿಸೂಚನೆ ಸಂಖ್ಯೆ : ಸಿಆಸುಇ 43 ಆಸೇವ 2010, ದಿನಾಂಕ : 11–01–2012 ರಲ್ಲಿ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ವೃಂದಕ್ಕೆ ನೀಡಿರುವ ಬಡ್ತಿಯನ್ನು ಕರ್ನಾಟಕ ನಾಗರೀಕ ಸೇವೆಗಳು (ಆರ್.ಪಿ.ಪಿ.ಪಿ) ನಿಯಮಗಳು 1978ರ ನಿಯಮ 2(1)(ಎ) ರನ್ವಯ ಇವರಿಗಿಂತ ಜೇಷ್ಠತೆಯಲ್ಲಿ ಕಿರಿಯರಾದ ಶ್ರೀ ಎಂ.ವಿ. ವೀರಭದ್ರಯ್ಯ ಇವರಿಗೆ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ವೃಂದಕ್ಕೆ ಬಡ್ತಿ ನೀಡಿದ ದಿನಾಂಕದಿಂದಲೇ ಅಂದರೆ ದಿನಾಂಕ : 25–07–2007 ರಿಂದಲೇ ಪೂರ್ವಾನ್ವಯವಾಗಿ ಬಡ್ತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ವಡಗಾವೆ ಬಸವರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು. ಇಲಾಖೆ (ಸೇವೆಗಳು–2).

**ಪಿ.ಆರ್. 513**

### ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಡಿಪಿಎಆರ್ 59 ಎಸ್‌ಪಿಎಸ್ 2012, ಬೆಂಗಳೂರು, ದಿನಾಂಕ : 26–3–2012.**

ಈ ಕೆಳಕಂಡ ಐಪಿಎಸ್ ಅಧಿಕಾರಿಗಳನ್ನು 3ನೇ ಹಂತದ ಮಿಡ್ ಕೆರಿಯರ್ ತರಬೇತಿ ಸಂಬಂಧ ಆಸ್ಟ್ರೇಲಿಯಾ ದೇಶಕ್ಕೆ ದಿನಾಂಕ : 19–03–2012 ರಿಂದ 30–03–2012 ರವರೆಗೆ ನಿಯೋಜಿಸಿ, ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ದಿನಾಂಕ : 03–02–2012 ಸಂಖ್ಯೆ : ಸಿಬಿ1/41/2011–12ರ ಆದೇಶ ಹೊರಡಿಸಿದ್ದಾರೆ.

**ಶ್ರೀಯುತರಾದ :**

1. ಹೆಚ್.ಎಸ್. ವೆಂಕಟೇಶ್, ಎಸ್.ಪಿ. ದಾವಣಗೆರೆ ಜಿಲ್ಲೆ.
2. ಎನ್. ಸತೀಶ್‌ಕುಮಾರ್, ಎಸ್.ಪಿ. ಬೀದರ್ ಜಿಲ್ಲೆ
3. ಡಾ॥ ಬಿ.ಎ. ಮಹೇಶ್, ಎಸ್.ಪಿ. ಸಿಐಡಿ, ಬೆಂಗಳೂರು
4. ಡಿ. ಪ್ರಕಾಶ್, ಎಸ್.ಪಿ. ಬೆಂಗಳೂರು ಜಿಲ್ಲೆ

5. ಟಿ.ಆರ್. ಸುರೇಶ್, ಎಸ್.ಪಿ. ತುಮಕೂರು ಜಿಲ್ಲೆ
6. ಎಂ.ಎನ್. ನಾಗರಾಜ್, ಎಸ್.ಪಿ. ಚಿತ್ರದುರ್ಗ ಜಿಲ್ಲೆ.
7. ಸಂದೀಪ್ ಪಾಟೀಲ್, ಎಸ್.ಪಿ. ಬೆಳಗಾವಿ ಜಿಲ್ಲೆ.
8. ಡಾ|| ಡಿ.ಸಿ. ರಾಜಪ್ಪ, ಎಸ್.ಪಿ. ಬಿಜಾಪುರ ಜಿಲ್ಲೆ.
9. ಕೆ.ಪಿ. ಪುಟ್ಟಸ್ವಾಮಿ, ಡಿಐಜಿಪಿ (ಕ್ರೈಮ್), ಮುಖ್ಯ ಕಛೇರಿ, ಬೆಂಗಳೂರು

ಭಾರತ ಸರ್ಕಾರ ದಿನಾಂಕ : 05–12–2007 ಸಂಖ್ಯೆ : 11019/06/2001–AIS-III ರ ಪತ್ರದಲ್ಲಿ ಹೊರಡಿಸಿರುವ ಸೂಚನೆಗಳಂತೆ ಮೇಲ್ಕಂಡ ಅಧಿಕಾರಿಗಳಿಗೆ ವಿದೇಶ ಪ್ರವಾಸದ ಅವಧಿಯ ಶೇಕಡ 50%ಕ್ಕೆ ಮಿತಿಗೊಳಿಸಿ ಎಕ್ಸ್–ಇಂಡಿಯಾ ಗಳಿಕೆ ರಜೆಯನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಶ್ರೀನಿವಾಸಮೂರ್ತಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸು ಇಲಾಖೆ (ಸೇವೆಗಳು–4).

**ಪಿ.ಆರ್. 514**

## PERSONNEL AND ADMINISTRATIVE REFORMS SECRETARIAT

### NOTIFICATION

### No. DPAR 01 SAS 2011 (P), Bangalore, dated : 27th March, 2012.

Consequent upon appointment of Sri N.M. Panali, SCS officer of Karnataka Cadre to IAS vide Government of India Notification No. 14015/11/2010-AIS(I)-(B), dated 14-3-2012, he is continued until further orders in the posts presently held him i.e. Chief Administrative Officer, Sanjay Gandhi Institute of Trauma & Orthopaedics, Bangalore.

By Order and in the name of the Governor of Karnataka,
**U.H. NARAYANASWAMY**
Under Secretary to Government, DP& AR (Services-I).

**P.R. 515**

## PERSONNEL AND ADMINISTRATIVE REFORMS SECRETARIAT

### CORRIGENDUM

### No. DPAR 209 SAS 2012, Bangalore, dated : 27th March 2012.

In Government Notification of even number dated 26-3-2012, the designation of Sri Munish Moudgil, IAS (KN 98) appearing in first and second line of Para-I as Commissioner, Upper Krishna Project, Rehabilitation & Resettlement, Bagalkot shall and shall always be deemed to have been substituted as Administrator, CADA, Bheemarayanagudi, Yadgir District.

By Order and in the name of the Governor of Karnataka,
**U.H. NARAYANASWAMY**
Under Secretary to Government, DP&AR (Services-I).

**P.R. 516**

## ಕಂದಾಯ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಆರ್‌ಡಿ 59 ಎಎಸ್‌ಡಿ 2012, ಬೆಂಗಳೂರು, ದಿನಾಂಕ 30ನೇ ಮಾರ್ಚ್ 2012

ಶ್ರೀ ಜಿ. ಮುನಿರಾಜಪ್ಪ, ತಹಶೀಲ್ದಾರ್, ಲಿಂಗಸೂಗೂರು ತಾಲ್ಲೂಕು, ರಾಯಚೂರು ಜಿಲ್ಲೆ ಇವರು ದಿನಾಂಕ 18.10.2011 ರಿಂದ 27.10.2011 ರವರೆಗೆ ಸ್ಥಳ ನೇಮಕಾತಿ ನಿರೀಕ್ಷಣೆಯಲ್ಲಿದ್ದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 8(15)(ಎಫ್) ರನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಸೇವೆಗಳು–3)

**ಪಿ.ಆರ್. 537**

## ಕಂದಾಯ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಆರ್‌ಡಿ 483 ಎಎಸ್‌ಡಿ 2011, ಬೆಂಗಳೂರು, ದಿನಾಂಕ 30ನೇ ಮಾರ್ಚ್ 2012**

ಶ್ರೀ ಎಸ್.ಆರ್. ಕೃಷ್ಣಯ್ಯ, ತಹಶೀಲ್ದಾರ್, ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ ಇವರು ದಿನಾಂಕ 18.06.2011 ರಿಂದ 28.07.2011 ರವರೆಗೆ ಸ್ಥಳ ನೇಮಕಾತಿ ನಿರೀಕ್ಷಣೆಯಲ್ಲಿದ್ದ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 8(15)(ಎಫ್) ರನ್ವಯ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ವಿ. ರಾಮಲಿಂಗಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ. (ಸೇವೆಗಳು–3)

**ಪಿ.ಆರ್. 538**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಲಾ 174 ಎಲ್‌ಎಜಿ 2011, ಬೆಂಗಳೂರು, ದಿನಾಂಕ 31ನೇ ಮಾರ್ಚ್ 2012**

ಬೆಂಗಳೂರು ನಗರ ಜಿಲ್ಲೆಯ ಆನೇಕಲ್ ತಾಲ್ಲೂಕಿನ ಅಪರ ಸರ್ಕಾರಿ ವಕೀಲರಾದ ಶ್ರೀ ಶ್ರೀನಿವಾಸ, ಸಿ.ಆರ್. ಇವರನ್ನು ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳ, 1977 ರಲ್ಲಿನ ಷರತ್ತಿಗೊಳಪಟ್ಟು ದಿನಾಂಕ 18–01–2011 ರಿಂದ ಜಾರಿಗೆ ಬರುವಂತೆ ತಾತ್ಕಾಲಿಕವಾಗಿ ಮುಂದಿನ ಆದೇಶದವರೆಗೆ ಅಥವಾ ಹೊಸದಾಗಿ ಅಪರ ಸರ್ಕಾರಿ ವಕೀಲರನ್ನು ನೇಮಕಾತಿ ಮಾಡುವವರೆಗೂ ಸರ್ಕಾರದ ಪ್ರಕರಣವನ್ನು ನಿರ್ವಹಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎ. ಗೌರೀಶ,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಪಿ.ಆರ್. 539**

## ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಲಾ 104 ಎಲ್‌ಎಜಿ 2011, ಬೆಂಗಳೂರು, ದಿನಾಂಕ 2ನೇ ಏಪ್ರಿಲ್ 2012**

ಶ್ರೀ ಗುಲಗಂಜಿ ಮಾಣಿಕರಾವ್, ಅಪರ ಸರ್ಕಾರಿ ವಕೀಲರು, ಚಿಂಚೋಳಿ (ಗುಲ್ಬರ್ಗ), ಇವರ ಸೇವಾವಧಿಯು ಮುಕ್ತಾಯವಾಗಿರುವುದರಿಂದ ಕರ್ನಾಟಕ ಕಾನೂನು ಅಧಿಕಾರಿಗಳ (ನೇಮಕಾತಿ ಮತ್ತು ಸೇವಾ ಷರತ್ತುಗಳು) ನಿಯಮಗಳು, 1977ರ ನಿಯಮ 26(2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹುದ್ದೆಯ ಅಧಿಕಾರ ವಹಿಸಿಕೊಳ್ಳುವ ದಿನಾಂಕದಿಂದ ಜಾರಿಗೆ ಬರುವಂತೆ ಮೂರು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಶ್ರೀ ಶ್ರೀಮಂತ ತಂದೆ ಬಕ್ಕಪ್ಪ ಕಟ್ಟಿಮನಿ, ವಕೀಲರು, ಇವರನ್ನು ಗುಲ್ಬರ್ಗ ಜಿಲ್ಲೆಯ ಚಿಂಚೋಳಿ ತಾಲ್ಲೂಕಿನ ಹಿರಿಯ ಶ್ರೇಣಿ ನ್ಯಾಯಾಲಯದ ಅಪರ ಸರ್ಕಾರಿ ವಕೀಲರ ಹುದ್ದೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎ. ಗೌರೀಶ,**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–1),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

**ಪಿ.ಆರ್. 540**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಅಪಜೀ 090 ಅಪಸೇ 12, ಬೆಂಗಳೂರು, ದಿನಾಂಕ 31ನೇ ಮಾರ್ಚ್ 2012**

ಶ್ರೀ ಐ.ಬಿ. ಶ್ರೀವಾಸ್ತವ, ಭಾಅಸೇ, ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕೆಗಳ ನಿಗಮ ನಿಯಮಿತ, ಬೆಂಗಳೂರು ಇವರು ದಿನಾಂಕ 31–03–2012 ರಂದು ವಯೋನಿವೃತ್ತಿ ಹೊಂದಲಿದ್ದು, ಇವರ ವಯೋನಿವೃತ್ತಿಯಿಂದ

ತೆರವಾಗುವ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕೆಗಳ ನಿಗಮ ನಿಯಮಿತ, ಬೆಂಗಳೂರು ಹುದ್ದೆಯ ಕಾರ್ಯಭಾರವನ್ನು ಶ್ರೀ ಸಿ.ಎಸ್. ವೇದಾಂತ್, ಭಾ.ಅ.ಸೇ. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು ಇವರಿಗೆ ವಹಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಬಾಲಕೃಷ್ಣಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು)
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಪಿ.ಆರ್. 541**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 51 ಅಸೇವ 2012, ಬೆಂಗಳೂರು, ದಿನಾಂಕ 5ನೇ ಏಪ್ರಿಲ್ 2012**

ಶ್ರೀ ಬಿ.ವಿ. ಕುಲಕರ್ಣಿ, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ಅಧಿಕಾರಿ, ಅಪರ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಧಾರವಾಡ, ಇವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರದ ಅಪರ ಕಾರ್ಯದರ್ಶಿ, (ಶಿಷ್ಟಾಚಾರ), ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, ವಿಧಾನಸೌಧ, ಬೆಂಗಳೂರು, ಹುದ್ದೆಗೆ – ಶ್ರೀ ವಿ. ಮೋಹನ್ ಕುಮಾರ್, ಕೆ.ಎ.ಎಸ್. (ಆಯ್ಕೆ ಶ್ರೇಣಿ) ಅಧಿಕಾರಿ, ಇವರ ಸ್ಥಾನದಲ್ಲಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಡಗಾವೆ ಬಸವರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2)

**ಪಿ.ಆರ್. 542**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 64 ಅಸೇವ 12, ಬೆಂಗಳೂರು, ದಿನಾಂಕ 03ನೇ ಏಪ್ರಿಲ್ 2012**

ಡಾ॥ ಎ.ವಿ. ಪ್ರಸನ್ನ, ನಿವೃತ್ತ ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಇವರನ್ನು ಮಾನ್ಯ ಮುಖ್ಯಮಂತ್ರಿಯವರ ವಿಶೇಷಾಧಿಕಾರಿಯನ್ನಾಗಿ ಗುತ್ತಿಗೆ ಆಧಾರದ ಮೇಲೆ ದಿನಾಂಕ 02-04-2012 ರಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅಥವಾ ಮಾನ್ಯ ಮುಖ್ಯಮಂತ್ರಿಯವರ ಪದಾವಧಿಯವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977 ರ ನಿಯಮ 15(1) (ಬಿ) (iii) ರನ್ವಯ ನೇಮಿಸಲಾಗಿದೆ.

ಡಾ॥ ಎ.ವಿ. ಪ್ರಸನ್ನ, ನಿವೃತ್ತ ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಇವರ ಗುತ್ತಿಗೆ ನೇಮಕಾತಿಗೆ ಸಂಬಂಧಿಸಿದಂತೆ ಸೇವಾ ಷರತ್ತುಗಳ ಬಗ್ಗೆ ಪ್ರತ್ಯೇಕವಾಗಿ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಡಗಾವೆ ಬಸವರಾಜ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-2)

**ಪಿ.ಆರ್. 543**

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ : ಸಿಆಸುಇ 231 ಸೇಅಸೆ 2012, ಬೆಂಗಳೂರು, ದಿನಾಂಕ 09ನೇ ಏಪ್ರಿಲ್ 2012**

ರಾಜ್ಯದ ಬರಪೀಡಿತ ಪ್ರದೇಶಗಳಲ್ಲಿ ಕುಡಿಯುವ ನೀರು, ಮೇವು ಗೋಶಾಲೆ ಮತ್ತು ಉದ್ಯೋಗ ಒದಗಿಸುವ ದೃಷ್ಟಿಯಿಂದ ಹಾಗೂ ಬರ ಪರಿಹಾರ ಕಾರ್ಯವನ್ನು ವೇಗವಾಗಿ ನಿರ್ವಹಿಸುವ ದೃಷ್ಟಿಯಿಂದ ಸಚಿವರುಗಳನ್ನೊಳಗೊಂಡ ಮೂರು ತಂಡಗಳನ್ನು ರಚಿಸಲಾಗಿದೆ ಮತ್ತು ಈ ಮೂರು ತಂಡಗಳು ಬರಪೀಡಿತ ಪ್ರದೇಶಗಳಲ್ಲಿ ದಿನಾಂಕ 09-04-2012 ರಿಂದ 13-04-2012 ರ ವರೆಗೆ ಪ್ರವಾಸ ಕೈಗೊಂಡು, ಬರ ಪರಿಹಾರದ ಕಾರ್ಯಗಳ ಪ್ರಗತಿ ಪರಿಶೀಲನೆ ನಡೆಸಿ, ಕೈಗೊಳ್ಳಬೇಕಾದ ಪರಿಹಾರ ಕ್ರಮಗಳ ಬಗ್ಗೆ ಸೂಕ್ತ ಮಾರ್ಗದರ್ಶನ ನೀಡಲು ಸೂಚಿಸಲಾಗಿದೆ.

ಈ ಬರ ಪೀಡಿತ ಜಿಲ್ಲೆಗಳ ಸಚಿವರುಗಳ ತಂಡದ ಪ್ರವಾಸದ ಸಂದರ್ಭದಲ್ಲಿ ಸೂಕ್ತ ಮಾಹಿತಿ ಒದಗಿಸಲು ಹಾಗೂ ಸಂಬಂಧಪಟ್ಟ ಜಿಲ್ಲಾಧಿಕಾರಿಗಳಿಂದ ಬರ ಪರಿಹಾರ ಕಾರ್ಯಗಳಿಗೆ ಸಂಬಂಧಿಸಿದಂತೆ ವಿವರಗಳನ್ನು ಪಡೆಯಲು ಹಾಗೂ ಸಚಿವರ ತಂಡಗಳ ಪ್ರವಾಸದಲ್ಲಿ ಸಮನ್ವಯ ಸಾಧಿಸಲು ಅನುಕೂಲವಾಗುವಂತೆ ಈ ಕೆಳಕಂಡ ಐ.ಎ.ಎಸ್. ಅಧಿಕಾರಿಗಳನ್ನು ಪ್ರಸ್ತುತ ಹೊಂದಿರುವ ಹುದ್ದೆಯ ಕಾರ್ಯಭಾರದ ಜೊತೆಗೆ ಸಚಿವರುಗಳ ತಂಡಕ್ಕೆ ನೋಡಲ್ ಆಫೀಸರ್ ಆಗಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಸಚಿವರುಗಳ ತಂಡದ ವಿವರ | ವಹಿಸಲಾದ ಜಿಲ್ಲೆಗಳು | ನೋಡಲ್ ಆಫೀಸರ್ ಆಗಿ ನೇಮಿಸಲಾದ ಐ.ಎ.ಎಸ್. ಅಧಿಕಾರಿಯ ಹೆಸರು |
|---|---|---|---|
| 1 | **ತಂಡ : 1**<br>ಶ್ರೀ ಜಗದೀಶ್ ಶೆಟ್ಟರ್<br>ಶ್ರೀ ಗೋವಿಂದ ಎಂ. ಕಾರಜೋಳ<br>ಶ್ರೀ ಸಿ.ಎಂ. ಉದಾಸಿ<br>ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ | ಬಿಜಾಪುರ, ಬಾಗಲಕೋಟೆ, ಧಾರವಾಡ, ಗದಗ, ಹಾವೇರಿ, ಬೆಳಗಾಂ, ದಾವಣಗೆರೆ | ಶ್ರೀ ಅದೋನಿ ಸಯ್ಯದ್ ಸಲೀಂ<br>ಆಯುಕ್ತರು, ಪಶುಸಂಗೋಪನೆ ಮತ್ತು ಪಶುವೈದ್ಯಕೀಯ ಸೇವೆಗಳ ಇಲಾಖೆ, ಬೆಂಗಳೂರು<br>ದೂರವಾಣಿ : ಕಛೇರಿ : 22864989 ಫ್ಯಾಕ್ಸ್ : 22861075<br>ಮೊ : 9448125880<br>ಇಮೇಲ್ : commissionerahvs@yahoo.in<br>adonisyedsaleem@yahoo.co.in |
| 2 | **ತಂಡ : 2**<br>ಶ್ರೀ ಬಸವರಾಜ ಬೊಮ್ಮಾಯಿ<br>ಶ್ರೀ ರೇವು ನಾಯ್ಕ ಬೆಳಮಗಿ<br>ಶ್ರೀ ಎಸ್.ಎ. ರಾಮದಾಸ್<br>ಶ್ರೀ ನರಸಿಂಹ ನಾಯಕ್ (ರಾಜುಗೌಡ) | ಗುಲಬರ್ಗಾ, ಕೊಪ್ಪಳ, ರಾಯಚೂರು, ಬಳ್ಳಾರಿ, ಬೀದರ್, ಚಿತ್ರದುರ್ಗ, ಯಾದಗಿರಿ | ಡಾ॥ ಜೆ. ರವಿಶಂಕರ್<br>ನಿರ್ದೇಶಕರು, ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು<br>ದೂರವಾಣಿ : ಕಛೇರಿ : 22240508 ಫ್ಯಾಕ್ಸ್ : 22240509<br>ಮೊ : 9448396569<br>ಇಮೇಲ್ : director@krwssa.org<br>ravi_ias31@yahoo.co.in |
| 3 | **ತಂಡ : 3**<br>ಶ್ರೀ ಎಸ್. ಸುರೇಶ್ ಕುಮಾರ್<br>ಶ್ರೀ ಆರ್. ಅಶೋಕ್<br>ಶ್ರೀ ಎಸ್.ಎ. ರವೀಂದ್ರನಾಥ್<br>ಶ್ರೀ ಬಿ.ಎನ್. ಬಚ್ಚೇಗೌಡ | ತುಮಕೂರು, ಕೋಲಾರ, ಚಿಕ್ಕಬಳ್ಳಾಪುರ, ಚಾಮರಾಜನಗರ, ಮೈಸೂರು, ಮಂಡ್ಯ | ಶ್ರೀ ಕೆ. ಅಮರನಾರಾಯಣ<br>ಸರ್ಕಾರದ ಕಾರ್ಯದರ್ಶಿ, ಕಂದಾಯ ಇಲಾಖೆ, (ವಿಪತ್ತು ನಿರ್ವಹಣೆ), ಬೆಂಗಳೂರು<br>ದೂರವಾಣಿ : ಕಛೇರಿ : 22353980 ಫ್ಯಾಕ್ಸ್ : 22354321<br>ಮೊ : 94482 90802<br>ಇಮೇಲ್ : secyrelief-rev@karnataka.gov.in;<br>amaranarayana@yahoo.com |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಹೆಚ್. ನಾಯಾಯಣಸ್ವಾಮಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು–1)

**ಪಿ.ಆರ್. 544**

## ಶಿಕ್ಷಣ ಸಚಿವಾಲಯ

## ಅಧಿಸೂಚನೆ

**ಸಂಖ್ಯೆ : ಇಡಿ 38 ಡಿಪಿಐ 2012, ಬೆಂಗಳೂರು, ದಿನಾಂಕ 05ನೇ ಏಪ್ರಿಲ್ 2012**

ಸಾರ್ವಜನಿಕ ಶಿಕ್ಷಣ ಇಲಾಖೆಯ, ಸಹ ನಿರ್ದೇಶಕ ವೃಂದದ ಅಧಿಕಾರಿಯಾದ ಶ್ರೀ ಎನ್.ಬಿ. ಪಾಟೀಲ್, ಸಹ ನಿರ್ದೇಶಕರು, ಸರ್ವ ಶಿಕ್ಷಣ ಅಭಿಯಾನ, ಬೆಂಗಳೂರು, ಇವರನ್ನು ಸಾರ್ವಜನಿಕ ಹಾಗೂ ಆಡಳಿತಾತ್ಮಕ ಹಿತದೃಷ್ಟಿಯಿಂದ ತತ್‌ಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ

ಆದೇಶದವರೆಗೆ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪಠ್ಯಪುಸ್ತಕ ಸಂಘ, ಬೆಂಗಳೂರು, ಇಲ್ಲಿ ಅಮಾನತ್ತಿನಿಂದ ತೆರವಾಗಿರುವ ಹುದ್ದೆಗೆ ಅವರ ಸ್ವಂತ ವೇತನ ಶ್ರೇಣಿಯ ಮೇಲೆ ವರ್ಗಾಯಿಸಿ ಸ್ಥಳ ನಿಯುಕ್ತಿಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಬಿ. ಸಸಾಲಟ್ಟಿ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಆಡಳಿತ).

**ಪಿ.ಆರ್. 545**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಮಮಇ 462 ಎಸ್‌ಜೆಡಿ 2011, ಬೆಂಗಳೂರು, ದಿನಾಂಕ 03ನೇ ಏಪ್ರಿಲ್ 2012

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸೇವೆಗೆ ಸೇರಿರುವ ಈ ಕೆಳಕಂಡ ಸಹಾಯಕ ನಿರ್ದೇಶಕರ ವೃಂದದ ಅಧಿಕಾರಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರೂ. 18150–450–19500–525–22650–600–26250–675–26925ರ ವೇತನ ಶ್ರೇಣಿಯ ಉಪ ನಿರ್ದೇಶಕರ ಹುದ್ದೆಯಲ್ಲಿ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಗಳಿಗೆ ಸ್ಥಳ ನಿಯುಕ್ತಿಗೊಳಿಸಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು/ಪದನಾಮ ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ಬಡ್ತಿ ನೀಡಿ ನೇಮಿಸಲಾದ ಹುದ್ದೆ |
|---|---|---|
| 1 | ಟಿ.ಎಸ್. ಅಪ್ಪಣ್ಣವರ್<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ,<br>ಉಪ ನಿರ್ದೇಶಕರ ಕಛೇರಿ, ಬೆಳಗಾಂ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೊಪ್ಪಳ (ಖಾಲಿ ಹುದ್ದೆ) |
| 2 | ಸುರೇಖ ವಿಜಯಪ್ರಕಾಶ್<br>ನಿರೂಪಣಾಧಿಕಾರಿ, ಉಪ ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ – ಸ್ವಂತ ವೇತನ ಶ್ರೇಣಿಯ ಮೇಲೆ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿಕ್ಕಬಳ್ಳಾಪುರ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿಕ್ಕಬಳ್ಳಾಪುರ (ಖಾಲಿ ಹುದ್ದೆ) |
| 3 | ರೋಹಿಣಿ ಸಿ. ಹಿರೇಮಠ<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ,<br>ಉಪ ನಿರ್ದೇಶಕರ ಕಛೇರಿ, ಬಾಗಲಕೋಟೆ – ಸ್ವಂತ ವೇತನ ಶ್ರೇಣಿಯ ಮೇಲೆ ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಗಲಕೋಟೆ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು (ಖಾಲಿ ಹುದ್ದೆ) |
| 4 | ದಿವ್ಯ ನಾರಾಯಣಪ್ಪ,<br>ಆಡಳಿತಾಧಿಕಾರಿ,<br>ಬಾಲಭವನ ಸೊಸೈಟಿ, (ನಿಯೋಜನೆ ಮೇಲೆ) | ಕಾರ್ಯದರ್ಶಿ, ಬಾಲಭವನ ಸೊಸೈಟಿ, ಬೆಂಗಳೂರು (ಖಾಲಿ ಹುದ್ದೆ) – ನಿಯೋಜನೆ ಮೇರೆಗೆ (ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಶ್ರೀಮತಿ ಇಂದಿರಾ, ಉಪ ನಿರ್ದೇಶಕರು (ಪಿಡಿಎಂ) ಇವರು ರಜೆಯ ಮೇಲೆ ತೆರಳಿರುವ ಹುದ್ದೆಯಲ್ಲಿ ಒಂದು ಕರ್ತವ್ಯ ನಿರ್ವಹಿಸಿ ಮಾರನೇ ದಿನದಿಂದ ನಿಯೋಜನೆಗೊಂಡ ಸ್ಥಳಕ್ಕೆ ಹಾಜರಾಗತಕ್ಕದ್ದು) |
| 5 | ಎಂ. ವೀಣಾ<br>ಸಹಾಯಕ ನಿರ್ದೇಶಕರು, ಮೇಲ್ವಿಚಾರಣೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬಾಲ್ಯ ವಿವಾಹ ನಿಷೇಧ ಘಟಕ (ಖಾಲಿ ಹುದ್ದೆ) |

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು/ಪದನಾಮ ಮತ್ತು ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ಬಡ್ತಿ ನೀಡಿ ನೇಮಿಸಲಾದ ಹುದ್ದೆ |
|---|---|---|
| 6 | ಎನ್. ಸುಜಾತ<br>ರಾಜ್ಯ ನಿರೂಪಣಾಧಿಕಾರಿ,<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೇಂದ್ರ ಕಛೇರಿ | ಉಪ ನಿರ್ದೇಶಕರು, ಪಿಡಿಎಂ ಶಾಖೆ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು (ಖಾಲಿ ಹುದ್ದೆ) |
| 7 | ಜೆ.ಪಿ. ಲಿಂಗರಾಜು<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ,<br>ಉಪ ನಿರ್ದೇಶಕರ ಕಛೇರಿ, ಮಡಿಕೇರಿ | ಕಾರ್ಯದರ್ಶಿ, ಕರ್ನಾಟಕ ರಾಜ್ಯ ಸಮಾಜ ಕಲ್ಯಾಣ ಮಂಡಳಿ, ಬೆಂಗಳೂರು (ನಿಯೋಜನೆ ಮೇಲೆ) – (ಖಾಲಿ ಹುದ್ದೆ)<br>(ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ ಶ್ರೀ ಕೆ. ಗೋಪಾಲಕೃಷ್ಣ, ಉಪ ನಿರ್ದೇಶಕರು, (ಮಹಿಳಾ ಕಲ್ಯಾಣ) ಇವರು ರಜೆಯ ಮೇಲೆ ತೆರಳಿರುವ ಹುದ್ದೆಯಲ್ಲಿ ಒಂದು ಕರ್ತವ್ಯ ನಿರ್ವಹಿಸಿ ಮಾರನೇ ದಿನದಿಂದ ನಿಯೋಜನೆಗೊಂಡ ಸ್ಥಳಕ್ಕೆ ಹಾಜರಾಗತಕ್ಕದ್ದು) |
| 8 | ರೀಟಾ ಮಾಡ್ತಾ<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ,<br>ಉಪ ನಿರ್ದೇಶಕರ ಕಛೇರಿ, ಚಿತ್ರದುರ್ಗ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಉಡುಪಿ ಜಿಲ್ಲೆ, ಶ್ರೀಮತಿ ಸುಮನ್ ಇವರ ವರ್ಗಾವಣೆಯಿಂದ ತೆರವಾಗುವ ಹುದ್ದೆ |
| 9 | ನಂಜೇಗೌಡ<br>ನಿರೂಪಣಾಧಿಕಾರಿ,<br>ಉಪ ನಿರ್ದೇಶಕರ ಕಛೇರಿ,<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿಕ್ಕಬಳ್ಳಾಪುರ | ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಿತ್ರದುರ್ಗ ಜಿಲ್ಲೆ – ಶ್ರೀ ಎಂ.ಎಸ್. ಜಯಸ್ವಾಮಿ ರವರ ಬಡ್ತಿಯಿಂದ ತೆರವಾದ ಹುದ್ದೆ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾರಾಯಣಸ್ವಾಮಿ,**

ಸರ್ಕಾರದ ಜಂಟಿ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಇಲಾಖೆ.

**ಪಿ.ಆರ್. 546**

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

### ಅಧಿಸೂಚನೆ

### ಸಂಖ್ಯೆ : ಮಮಇ 656 ಎಸ್‌ಜಿಡಿ 2011, ಬೆಂಗಳೂರು, ದಿನಾಂಕ 03ನೇ ಏಪ್ರಿಲ್ 2012

1. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸೇವೆಗೆ ಸೇರಿರುವ ಈ ಕೆಳಕಂಡ ಉಪ ನಿರ್ದೇಶಕ ವೃಂದದ ಅಧಿಕಾರಿಗಳಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವೇತನ ಶ್ರೇಣಿ ರೂ. 20025–28275 ರಲ್ಲಿನ ಜಂಟಿ ನಿರ್ದೇಶಕರ ವೃಂದಕ್ಕೆ ಸ್ಥಾನಪನ್ನ ಬಡ್ತಿ ನೀಡಿ ಅವರುಗಳ ಹೆಸರಿನ ಮುಂದೆ ಸೂಚಿಸಿರುವ ಸ್ಥಳಕ್ಕೆ ನಿಯುಕ್ತಿಗೊಳಿಸಿ ನೇಮಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು/ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ಬಡ್ತಿ ಮೇಲೆ ನೇಮಿಸಲಾದ ಹುದ್ದೆ |
|---|---|---|
| 1 | ಶ್ರೀ ಎಂ.ಎಸ್. ಜಯಸ್ವಾಮಿ,<br>ಉಪ ನಿರ್ದೇಶಕರು,<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ,<br>ಚಿತ್ರದುರ್ಗ ಜಿಲ್ಲೆ | ಜಂಟಿ ನಿರ್ದೇಶಕರು, (ಪಿಡಿಎಂ ಶಾಖೆ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು<br>(ಶ್ರೀಮತಿ ನುಸರತ್ ಫಾತಿಮ ಇವರ ವರ್ಗಾವಣೆಯಿಂದ ತೆರವಾದ ಸ್ಥಳ) |

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು/ ಕಾರ್ಯ ನಿರ್ವಹಿಸುತ್ತಿರುವ ಸ್ಥಳ ಶ್ರೀ/ಶ್ರೀಮತಿ | ಬಡ್ತಿ ಮೇಲೆ ನೇಮಿಸಲಾದ ಹುದ್ದೆ |
|---|---|---|
| 2 | ಶ್ರೀ ಹೆಚ್. ಪಿ. ಶಿವಶಂಕರ್,<br>ಉಪ ನಿರ್ದೇಶಕರು,<br>(ನಿಯೋಜನೆ ಮೇಲೆ ಆಡಳಿತ ತರಬೇತಿ ಸಂಸ್ಥೆ, ಮೈಸೂರು) | ಬೋಧಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು<br>ಯೋಜನಾ ನಿರ್ದೇಶಕರು (ಸ್ತ್ರೀ ಶಕ್ತಿ ಘಟಕ),<br>ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಕೇಂದ್ರ ಕಛೇರಿ, ಬೆಂಗಳೂರು– ಶ್ರೀಮತಿ ಬಿಂದು ಅವರು ರಜೆ ಮೇಲೆ ತೆರಳಿದ ಸ್ಥಳ (ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಕೇಂದ್ರ ಕಛೇರಿಯಲ್ಲಿನ ಹುದ್ದೆಯಲ್ಲಿ ವರದಿ ಮಾಡಿಕೊಂಡು ಒಂದು ದಿನ ಕರ್ತವ್ಯ ನಿರ್ವಹಿಸಿದ ಮಾರನೆ ದಿನದಿಂದ ಇವರನ್ನು ಬೋಧಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಈ ಹುದ್ದೆಗೆ ನಿಯೋಜಿಸಲಾಗಿದೆ.) |

2. ಶ್ರೀಮತಿ ನುಸರತ್ ಫಾತಿಮಾ, ಜಂಟಿ ನಿರ್ದೇಶಕರು, (ಪಿಡಿಎಂ ಶಾಖೆ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಜಂಟಿ ನಿರ್ದೇಶಕರು, ವಿಕಲಚೇತನರ ಹಾಗೂ ಹಿರಿಯ ನಾಗರೀಕರ ಸಬಲೀಕರಣ ಇಲಾಖೆ ಇಲ್ಲಿನ ಹುದ್ದೆಗೆ ನಿಯೋಜನೆ ಮೇಲೆ ವರ್ಗಾಯಿಸಿ ಸ್ಥಳ ನಿಯುಕ್ತಿಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ನಾರಾಯಣಸ್ವಾಮಿ,**

ಸರ್ಕಾರದ ಜಂಟಿ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿಇಲಾಖೆ.

**ಪಿ.ಆರ್. 547**